**ಕರ್ನಾಟಕ ವಿಧಾನ ಪರಿಷತ್ತು**

| | | |
|---|---|---|
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 933(1176) |
| ಸದಸ್ಯರ ಹೆಸರು | : | ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 16.03.2020 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಈ ಹಿಂದೆ ಶಿಕ್ಷಕರ ವೇತನ ತಾರತಮ್ಯ ಸರಿಪಡಿಸಲು (ಪ್ರೌಢ ಶಾಲಾ ಹಾಗೂ ಪದವಿ ಪೂರ್ವ, ಶಿಕ್ಷಕರು, ಮುಖ್ಯ ಗುರುಗಳು, ಪ್ರಾಚಾರ್ಯರು ಉಪನ್ಯಾಸಕರು) ಎಕ್ಸ್‌ಗ್ರೇಷಿಯಾ ನೀಡಲಾಗಿತ್ತೇ; ಆ ಎಕ್ಸ್‌ಗ್ರೇಷಿಯಾವನ್ನು ಒಂದು ಇಂಕ್ರಿಮೆಂಟ್ ಆಗಿ ಪರಿವರ್ತಿಸಿ ಮೂಲ ವೇತನದಲ್ಲಿ ಸೇರಿಸಲು 06ನೇ ವೇತನ ಆಯೋಗ ಶಿಫಾರಸ್ಸು ಮಾಡಿರುವುದೇ; | ಹೌದು |
| ಆ. | ಈ ಎಕ್ಸ್‌ಗ್ರೇಷಿಯಾ ಎಲ್ಲಾ ಪ್ರೌಢಶಾಲಾ ಶಿಕ್ಷಕರು, ಮುಖ್ಯ ಗುರುಗಳು, ಪದವಿ ಪೂರ್ವ ಉಪನ್ಯಾಸಕರು, ಪ್ರಾಚಾರ್ಯರು ಇವರುಗಳಿಗೆ ನೀಡಲಾಗಿತ್ತೇ; ನೀಡಿರದಿದ್ದರೆ ಯಾರಿಗೆ ಯಾವ ಯಾವ ಕಾರಣಕ್ಕಾಗಿ ನೀಡಲಾಗಿಲ್ಲ; (ಸಂಪೂರ್ಣ ವಿವರ ನೀಡುವುದು) ನೀಡಿದ್ದಲ್ಲಿ, ಈ ಹೆಚ್ಚುವರಿ ವೇತನ ಬಡ್ತಿಯನ್ನು ಮರು ಪಾವತಿಕೊಳ್ಳಲು ಆದೇಶ ಹೊರಡಿಸಲಾಗಿದೆಯೇ; ಹೊರಡಿಸಿದ್ದರೆ, ಯಾವ ಕಾರಣಕ್ಕೆ ಹೊರಡಿಸಲಾಗಿದೆ; | ➢ 6ನೇ ವೇತನ ಆಯೋಗದ ಶಿಫಾರಸ್ಸಿನನ್ವಯ ದಿನಾಂಕ:01.08.2008ರ ಪೂರ್ವದಲ್ಲಿ ನೇಮಕಗೊಂಡ ಪ್ರಾಥಮಿಕ ಶಾಲಾ ಶಿಕ್ಷಕರು, ಪ್ರೌಢಶಾಲಾ ಶಿಕ್ಷಕರು ಮತ್ತು ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರುಗಳಿಗೆ ವಿಶೇಷ ಭತ್ಯೆಯನ್ನು ಮೂಲ ವೇತನದಲ್ಲಿ ವಿಲೀನಗೊಳಿಸಲಾಗಿದೆ.<br>➢ ಸರ್ಕಾರದ ಆದೇಶ ಸಂಖ್ಯೆ:255 ಎಸ್‌ಎಲ್‌ಬಿ 2016, ದಿನಾಂಕ:23/07/2018ರ ಆದೇಶದನ್ವಯ ದಿನಾಂಕ:01.08.2008ರ ನಂತರ ಪ್ರೌಢಶಾಲೆಗಳಿಗೆ ನೇರ ನೇಮಕಾತಿ ಮತ್ತು ಬಡ್ತಿ ಮೂಲಕ ಕರ್ತವ್ಯಕ್ಕೆ ಹಾಜರಾದ ಶಿಕ್ಷಕರುಗಳಿಗೆ ವಿಶೇಷ ಭತ್ಯೆ ನೀಡಲು ಅವಕಾಶವಿರುವುದಿಲ್ಲ.<br>➢ ದಿನಾಂಕ:31/03/2017 ಅಂತ್ಯಗೊಂಡಂತೆ ಲೆಕ್ಕನಿಯಂತ್ರಕರು ಮತ್ತು ಮಹಾಲೇಖಪಾಲರು ನೀಡಿರುವ ಲೆಕ್ಕಪರಿಶೋಧಕರ ವರದಿಯಲ್ಲಿ ವಿಶೇಷ ಭತ್ಯೆಯ ಅಂಗೀಕರಿಸಲಾದ ಪಾವತಿಯ ಕುರಿತು ಆಕ್ಷೇಪಣೆಗೆ ಸಂಬಂಧಿಸಿದಂತೆ ವೇತನ ಬಟವಾಡೆ ಅಧಿಕಾರಿಗಳಿಂದ ವಸೂಲಾತಿಗೆ ಕ್ರಮವಹಿಸಲು ನಿರ್ದೇಶನ ನೀಡಲಾಗಿದೆ.<br>**ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರಿಗೆ ಸಂಬಂಧಿಸಿದಂತೆ**<br>ಪದವಿ ಪೂರ್ವ ಕಾಲೇಜುಗಳ 1896 ಉಪನ್ಯಾಸಕರಿಂದ ರೂ.193.25 ಲಕ್ಷಗಳ ವಿಶೇಷ ಭತ್ಯೆ ಪಡೆದ ಮೊತ್ತವನ್ನು ವಸೂಲಿ ಮಾಡಿ ಸಂಬಂಧಿಸಿದ ಲೆಕ್ಕ ಶೀರ್ಷಿಕೆಗೆ ಜಮಾ ಮಾಡಲು ಪ್ರಾಚಾರ್ಯರುಗಳಿಗೆ ಸೂಚಿಸಲಾಗಿತ್ತು. ಅದರಂತೆ ಬಳ್ಳಾರಿ, ಬೆಳಗಾವಿ, ಬೆಂಗಳೂರು ಉತ್ತರ, ಬೀದರ್, ಹಾವೇರಿ, ಕೋಲಾರ, ಶಿವಮೊಗ್ಗ, ಉಡುಪಿ, ಕೊಡಗು ಜಿಲ್ಲೆಗಳಲ್ಲಿ ಈಗಾಗಲೇ ವಸೂಲಾತಿಯ ಕ್ರಮ ವಹಿಸಿದ್ದು, ಇಲ್ಲಿಯವರೆಗೆ ಒಟ್ಟು ಮೊತ್ತ 13.23 ಲಕ್ಷಗಳನ್ನು ವಸೂಲಿಸಿ ಸಂಬಂಧಿಸಿದ ಲೆಕ್ಕ ಶೀರ್ಷಿಕೆಗೆ ಜಮಾ ಮಾಡಲಾಗಿದೆ ಹಾಗೂ ಇನ್ನುಳಿದ ಜಿಲ್ಲೆಗಳಲ್ಲಿ ವಸೂಲಾತಿಗಾಗಿ ಕ್ರಮ ತೆಗೆದುಕೊಂಡು ಮಾಹಿತಿ ನೀಡಲು ಸೂಚಿಸಲಾಗಿದೆ. |

| | | |
|---|---|---|
| ಇ. | 01/08/2008ರ ನಂತರ ನೇಮಕವಾದ ಪ್ರೌಢಶಾಲಾ ಶಿಕ್ಷಕರು, ಮುಖ್ಯ ಗುರುಗಳು, ಅನುದಾನಿತ ಶಿಕ್ಷಣ ಸಂಸ್ಥೆಗಳ ಶಿಕ್ಷಕರುಗಳು ಎಕ್ಸ್‌ಗ್ರೇಷಿಯಾ ಇಂಕ್ರಿಮೆಂಟ್ ಆಗಿ ಮೂಲ ವೇತನದಲ್ಲಿ ಸೇರಿಸುವಲ್ಲಿ ಅನ್ಯಾಯಕ್ಕೆ ಒಳಗಾಗಿದ್ದಾರೆ ಎಂಬುವುದನ್ನು ಸರ್ಕಾರದ ಗಮನಕ್ಕೆ ಬಂದಿದೆಯೇ; ನಿಯಮಗಳನ್ನು ರೂಪಿಸಿರುವ ಸರ್ಕಾರವೇ ನಿಯಮಗಳ ನೆಪವೊಡ್ಡಿ ಇವರಿಗೆ ಅನ್ಯಾಯ ಮಾಡುವುದು ಸರಿಯೇ; ಯಾವ ಕಾಲಮಿತಿಯ ಒಳಗೆ ಇವರಿಗೂ ಈ ಸೌಲಭ್ಯ ಒದಗಿಸಲಾಗುವುದು; ಹಾಗೂ ಮರು ಪಾವತಿಸಿಕೊಳ್ಳುವ ಆದೇಶವನ್ನು ವಾಪಸ್ಸು ಪಡೆಯಲಾಗುವುದೇ; (ಸಂಪೂರ್ಣ ವಿವರ ನೀಡುವುದು) | ➢ ಸರ್ಕಾರದ ಆದೇಶ ಸಂಖ್ಯೆ:255 ಎಸ್‌ಎಲ್‌ಬಿ 2016. ದಿನಾಂಕ:23/07/2018ರ ಪ್ರಕಾರ ದಿನಾಂಕ:01.08.2008ರ ನಂತರ ಪ್ರೌಢಶಾಲೆಗಳಿಗೆ ನೇರ ನೇಮಕಾತಿ ಮತ್ತು ಬಡ್ತಿ ಮೂಲಕ ಕರ್ತವ್ಯಕ್ಕೆ ಹಾಜರಾದ ಶಿಕ್ಷಕರುಗಳಿಗೆ ವಿಶೇಷ ಭತ್ಯೆ ನೀಡಲು ಅವಕಾಶವಿರುವುದಿಲ್ಲ.<br>➢ 6ನೇ ವೇತನ ಆಯೋಗದ ಶಿಫಾರಸ್ಸಿನ ಅನ್ವಯ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 06 ಎಸ್‌ಆರ್‌ಪಿ 2018 ದಿನಾಂಕ:19/04/2018ರಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರು, ಪ್ರೌಢಶಾಲಾ ಶಿಕ್ಷಕರು ಮತ್ತು ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರುಗಳಿಗೆ ಅವರು ಪಡೆಯುತ್ತಿದ್ದ ವಿಶೇಷ ಭತ್ಯೆಯನ್ನು ಆಯಾ ಶಿಕ್ಷಕರ ಸಂವಾದಿ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ಶಿಕ್ಷಕರ ಮೂಲ ವೇತನದೊಂದಿಗೆ ಸೇರಿಸತಕ್ಕದ್ದು ಎಂದು ಆದೇಶಿಸಲಾಗಿದೆ. ಅದರಂತೆ ಅನುಷ್ಠಾನಗೊಳಿಸಲಾಗಿದೆ.<br>➢ ದಿನಾಂಕ: 01.08.2008 ರ ನಂತರ ನೇಮಕಾತಿ/ಬಡ್ತಿ ಹೊಂದಿದ ಶಿಕ್ಷಕರುಗಳಿಗೆ ವಿಶೇಷ ವೇತನ ಭತ್ಯೆ ನೀಡಲು ಅವಕಾಶವಿಲ್ಲದ ಕಾರಣ ಪತ್ರ ದಿನಾಂಕ: 04.11.2017ರ ಮೂಲಕ ನಿಯಮಭಾಹೀರವಾಗಿ 01.08.2008 ರ ನಂತರ ನೇಮಕಾತಿ/ಬಡ್ತಿ ಹೊಂದಿದ ಶಿಕ್ಷಕರುಗಳಿಗೆ ವಿಶೇಷ ವೇತನ ಭತ್ಯೆ ನೀಡಿರುವುದನ್ನು ಶಿಕ್ಷಕರುಗಳ ವೇತನದಲ್ಲಿ ತಡಹಿಡಿಯಲು ಮತ್ತು ಹೆಚ್ಚುವರಿಯಾಗಿ ಪಾವತಿಸಿರುವ ಮೊತ್ತವನ್ನು ವಸೂಲಿ ಮಾಡಲು ಆದೇಶ ನೀಡಲಾಗಿತ್ತು. ಈ ಸಂಬಂಧ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಕರ ಮನವಿ ಪರಿಗಣಿಸಿ ದಿನಾಂಕ:13.07.2018 ರಂದು ಮೇಲ್ಮನೆ ಸಭಾಪತಿಗಳ ಮತ್ತು ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸೂಚಿಸಿರುವಂತೆ ವಿಶೇಷ ಭತ್ಯೆಯ ಕಟಾವಣೆಗಳನ್ನು ಸ್ಥಗಿತಗೊಳಿಸಲು ಪತ್ರ ದಿನಾಂಕ:13.07.2018 ರಲ್ಲಿ ಸೂಚಿಸಲಾಗಿದೆ. ಅದರಂತೆ ಶಿಕ್ಷಕರುಗಳಿಂದ ವಿಶೇಷ ಭತ್ಯೆಗೆ ಸಂಬಂಧಿಸಿದಂತೆ ಯಾವುದೇ ಮೊತ್ತವನ್ನು ವಸೂಲಾತಿ ಮಾಡಿರುವುದಿಲ್ಲ.<br>➢ ಮುಂದುವರೆದು ಮಾನ್ಯ ಕೆ.ಎ.ಟಿಯ ಅರ್ಜಿ ಸಂಖ್ಯೆ: 562-563/2017 ರ ತೀರ್ಪು ದಿನಾಂಕ: 29.09.2018 ರಲ್ಲಿ ಮಾನ್ಯ ಅಪೆಕ್ಸ್ ಕೋರ್ಟ್ State of Punjab V/s Rafiq Masih (White washer), (2015 AIR SCW 501). ರ ಪ್ರಕರಣವನ್ನು ಉಲ್ಲೇಖಿಸಿ 'ಸಿ' ಮತ್ತು 'ಡಿ' ಗುಂಪಿನ ಸಿಬ್ಬಂದಿಯಿಂದ ಪ್ರಸ್ತಾಪಿತ ಹೆಚ್ಚುವರಿ ಮೊಬಲಗನ್ನು ವಸೂಲು ಮಾಡಬಾರದೆಂದು ಆದೇಶಿರುತ್ತದೆ. ಈ ಹಿನ್ನಲೆಯಲ್ಲಿ ಹೆಚ್ಚುವರಿ ಪಾವತಿಸಿರುವ ಮೊಬಲಗನ್ನು 'ಸಿ' ಗುಂಪಿನ ಶಿಕ್ಷಕರಿಂದ ವಸೂಲಿ ಮಾಡಲು ಅವಕಾಶವಿರುವುದಿಲ್ಲ. |

ಸಂಖ್ಯೆ: ಇಪಿ 49 ಎಸ್‌ಎಲ್‌ಬಿ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು